**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 2ನೇ ರಾಜಭವನ ರಸ್ತೆ, ಪಿ.ಬಿ.ನಂ. 5309, ಬೆಂಗಳೂರು-560 001**

**ಅಧಿಸೂಚನೆ**

**ಸಂಖ್ಯೆ: ಕೃಮಾಇ: 287: ನಿಯವಿ: 2003 ದಿನಾಂಕ: 3ನೇ ನವೆಂಬರ್ 2003**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು ಬೆಂಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟಿರುವ "ಎಳನೀರು" ಮಾರಾಟ ನಿಯಂತ್ರಣಕ್ಕಾಗಿ ಬೊಮ್ಮನಹಳ್ಳಿ ನಗರಸಭೆ ಪರಿಮಿತಿಯೊಳಗಿನ ಪ್ರದೇಶವನ್ನು "ಉಪಮಾರುಕಟ್ಟೆ" ಎಂದು ಮತ್ತು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಹಾಲಿ ಎಳನೀರು ವ್ಯಾಪಾರ ನಡೆಯುತ್ತಿರುವ ಸ್ಥಳವನ್ನು "ಉಪಮಾರುಕಟ್ಟೆ ಪ್ರಾಂಗಣ" ಎಂದು ಈ ಮೂಲಕ ಘೋಷಿಸಿದ್ದೇನೆ.

**ಅನುಸೂಚಿ**

ಬೊಮ್ಮನಹಳ್ಳಿ ನಗರಸಭಾ ಪರಿಮಿತಿಯೊಳಗಿನ ಪ್ರದೇಶದಲ್ಲಿ ಬೆಂಗಳೂರು ಹೊಸೂರು ರಸ್ತೆಯ ಪಶ್ಚಿಮ ದಿಕ್ಕಿನಲ್ಲಿರುವ ಸೇವಾ ರಸ್ತೆಯ ಉತ್ತರದಲ್ಲಿ ಡಾ: ಅಂಬೇಡ್ಕರ್ ಸ್ಟ್ರೀಟ್‌ನಿಂದ ಪ್ರಾರಂಭಿಸಿ ದಕ್ಷಿಣದಲ್ಲಿ ಶ್ರೀ ಭ್ರಮರಾಂಭ ಮಲ್ಲಿಕಾರ್ಜುನ ದೇವಸ್ಥಾನದವರೆಗಿನ ಪ್ರದೇಶ ಮತ್ತು ಹಾಲಿ ಎಳನೀರು ವ್ಯಾಪಾರ ನಡೆಯುತ್ತಿರುವ ಈ ಕೆಳಗಿನ ಸೀಮಾಬದ್ದ ಸ್ಥಳ

ಪೂರ್ವಕ್ಕೆ : ಬೆಂಗಳೂರು-ಹೊಸೂರು ರಸ್ತೆ
ಪಶ್ಚಿಮಕ್ಕೆ : ಬೇಗೂರು ಕ್ರಾಸ್ ರಸ್ತೆ (8ನೇ ಮುಖ್ಯ ರಸ್ತೆ)
ಉತ್ತರಕ್ಕೆ : ಡಾ: ಬಿ. ಆರ್. ಅಂಬೇಡ್ಕರ್ ಸ್ಟ್ರೀಟ್
ದಕ್ಷಿಣಕ್ಕೆ : ವಿ. ಎಸ್. ಬಯೋಫಾರ್ಮ್, ಎಸ್. ವಿ. ಡೆಗ್ಗರ್ಸ್, ರಾಜೇಶ್ವರಿ ವೇಯರ್ಸ್ ಇವರ ಕಟ್ಟಡಗಳು ಮತ್ತು ತೆಂಗಿನ ತೋಟ ಇರುವ ಪ್ರದೇಶ

ಸೈಯದ್ ಜಮಿರ್ ಪಾಷಾ
ಪಿ. ಆರ್. 1233 ನಿರ್ದೇಶಕರು.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಪ್ರಕಟಣೆ**

**ಸಂಖ್ಯೆ: ಕವಿಪ್ರನಿನಿ: 614: ಕಾನಿಇಂ: ಬೃಕಾವಿ:ಬಾಕೋ: ಕ.ನಂ.199:2864:66 ದಿನಾಂಕ: 22ನೇ ಅಕ್ಟೋಬರ್ 2003**

1948ರ ಅಧಿನಿಯಮ ಭಾರತ ವಿದ್ಯುಚ್ಛಕ್ತಿ 29(1) ಅಡಿಯಲ್ಲಿ ಮಂಜೂರಾತಿಯಾದ ಯೋಜನೆಯನ್ನು ಈ ಮೂಲಕ ಪ್ರಕಟಿಸಲಾಗಿದೆ.

1948ರ ವಿದ್ಯುತ್ ಸರಬರಾಜು ಕಾಯಿದೆ ಅನುಬಂಧ 28ರ ಅಡಿಯಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಯೋಜನೆಗಳನ್ನು ರೂಪಿಸಿದ್ದು ಕಾಯಿದೆ ಅನುಬಂಧ 29 (1) ಅಡಿಯಲ್ಲಿ ಪರವಾನಿಗೆ ಹೊಂದಿದ ಹಾಗೂ ಆಸಕ್ತ ವ್ಯಕ್ತಿಗಳ ಮಾಹಿತಿಗಾಗಿ ಯೋಜನೆಯ ವಿವರಗಳು ಈ ಕೆಳಗಿನಂತಿವೆ.

**ಯೋಜನೆಯ ಹೆಸರು:** 110 ಕೆ.ವ್ಹಿ. ಸಿಂಗಲ್ ಸರ್ಕ್ಯುಟ್ ಮಹಾಲಿಂಗಪೂರ- ಮುಧೋಳ ಮಾರ್ಗಕ್ಕೆ 110 ಕೆ.ವ್ಹಿ. ಲಿಲೋ ಮಾರ್ಗ ರಚಿಸಿ, ಪ್ರಸ್ಥಾವಿತ 110 ಕೆ.ವ್ಹಿ. ಉತ್ತುರ ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು.

**ಪ್ರಮುಖ ಲಕ್ಷಣಗಳು:** ಉತ್ತುರ ಸುತ್ತಮುತ್ತ ವಿದ್ಯುತ್‌ಚ್ಛಕ್ತಿಯ ಸ್ಥಿತಿಯನ್ನು ಉತ್ತಮಗೊಳಿಸುವುದು. ಪ್ರಸ್ಥಾವನೆ ಮಾಡಿದ ವಿದ್ಯುತ್ ಮಾರ್ಗವು ಲೊಕೇಶನ್ ನಂ. 166 ರಿಂದ ಕುಳಲಿ ರಸ್ತೆ, ಮುಧೋಳ ಮಹಾಲಿಂಗಪೂರ ರಸ್ತೆ -ಜಾಲಿಬೇರ ರಸ್ತೆ, ಉತ್ತುರ ಮುಧೋಳ ರಸ್ತೆ ಮಾರ್ಗವಾಗಿ ಪ್ರಸ್ಥಾವಿತ 110:11 ಕೆ.ವ್ಹಿ. ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು.

ಯೋಜನೆಯ ಅಂದಾಜು ವೆಚ್ಚ 457.35 ಲಕ್ಷ ರೂಪಾಯಿಗಳು.

ಮೇಲಿನ ಯೋಜನೆಯನ್ನು ನಿರ್ವಹಿಸಲು 1885ರ ಭಾರತೀಯ ಟೆಲಿಗ್ರಾಫ್ ಕಾಯ್ದೆ (1885ರ 13) ಭಾಗ 3ರ ಅನ್ವಯ ಟೆಲಿಗ್ರಾಫ್ ಪ್ರಾಧಿಕಾರವು ಪಡೆದುಕೊಂಡಿರುವ ಎಲ್ಲಾ ಅಧಿಕಾರವನ್ನು ನಿಗಮವು ಹೊಂದಿರುವುದು ಮತ್ತು ಚಲಾಯಿಸುವ ಹಕ್ಕನ್ನು ಪಡೆದಿರುವುದು. ಯೋಜನೆಯ ಬಗ್ಗೆ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಅವುಗಳನ್ನು ಪರಿಗಣಿಸಲು ಕಾರ್ಯನಿರ್ವಾಹಕ ಇಂಜಿನೀಯರರು (ವಿ), ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ., ಬಾಗಲಕೋಟ ಇವರಿಗೆ ಈ ಪ್ರಕಟಣೆ ಪ್ರಕಟವಾದ ದಿನಾಂಕದಿಂದ ಎರಡು ತಿಂಗಳುಗಳ ಒಳಗೆ ತಲುಪುವಂತೆ ಕಳುಹಿಸಿಕೊಡಬೇಕು.

ಕಾರ್ಯನಿರ್ವಾಹಕ ಇಂಜಿನೀಯರ್ (ವಿ),
ಪಿ.ಡಿ. 118 ಬೃ. ಕಾ. ವಿಭಾಗ, ಕ.ವಿ.ಪ್ರ.ನಿ.ನಿ.,
ಬಾಗಲಕೋಟೆ.

**DEVON CONSOLIDATED SERVICES LIMITED**

**29, Emphire Infantry, Infantry Road, Bangalore-560001**

**NOTICE**

Notice is hereby given for general information that the members of Devon Consolidated Services Limited at an extraordinary general meeting of the company held on Wednesday, the 27th October 2003

at its registered office, have passed the following special resolution to wind up the above company voluntarily.

"RESOLVED THAT pursuant to Section 484 and any other provisions of the Companies Act, 1956, applicable if any, the company be wound up voluntarily and Mr. K. Kurian, Director is hereby authorised to give notice of the resolution by advertisement in the Official Gazette and also in two newspapers, one in English and one in the vernacular language circulating in the district of the registered office of the company within fourteen days from the date of passing of the resolution."

Any person who objects to the voluntary winding up of the company by the members may send their representations to Mr. K. Kurian, Liquidator of the company appointed by the members of the company by an ordinary resolution in the above mentioned extraordinary general meeting within 10 days of the publication of this notice addressed to the registered office of the company.

Registration No. : 8021
Nominal Capital : Rs.20,00,000/-

By the Order of the Board
**K. KURIAN**
Liquidator.

**FORM No. 151**
**[See Rule 315]**
**COMPANIES ACT, 1956**
**Member's (or Creditor's) Voluntary Winding-up**
**Notice of appointment of liquidator pursuant to section 516**

Name of the Company : **DEVON CONSOLIDATED SERVICES LIMITED**
Nature of business : FINANCE
Address of Registered Office : Empire Infantry, 29, Infantry Road, Bangalore-560001.
Name(s) and address(s) of Liquidators : **K. Kurian,**
16/15, Binny Crescent,
Benson Town,
Bangalore-560046.
Date of appointment : 27th October 2003
By whom appointed : Members in General Meeting (resolution enclosed)

Dated the 27th day of October 2003

**K. KURIAN**
Liquidator.

PD-119

**OFFICE OF THE DIRECTOR DEPARTMENT OF MINES AND GEOLOGY, KHANIJA BHAVAN, RACE COURSE ROAD, BANGALORE-1,**
**NOTIFICATION**
**No: DMG/DD(MA)8A/2002-2003 Dated: 16th October 2003.**

The following area of Bellary Taluk, Bellary district belonging to the State Government are hereby notified as available for grant of quarrying leases for non-specified minor minerals after thirty (30) days from the date of publication of this notification in the official Gazette, as per Sub-Rule (1) of Rule 8A of KMMCR 1994. If the day notified for receipt of the application happens to be a public holiday or a general holiday, the application. will be accepted on the next working day.

The prescribed applications and the sketches of the notified area can be obtained from the office of the Senior Geologist, Department of Mines & Geology, Bellary office, Bellary district on payment of prescribed fees.

The interested general public are advised to inspect the areas and satisfy themselves about the availability of the minerals, approach road, and extent before filing their quarry lease application with the office of the Senior Geologist Department of Mines and Geology, Bellary office, Bellary district. The grant of quarry lease are subject to the clearance from the concerned authorities of the Revenue Department.

**Dr. M. BASAPPA REDDY**
Director of Mines & Geology

**AREA PROPOSED FOR ISSUE OF NOTIFICATIONS UNDER RULE 8A OF KMMCR 1994 IN RESPECT OF NON-SPECIFIED MINOR MINERALS IN BELLARY TALUK, BELLARY DISTRICT**

| Sl. No. | Type of mineral | Block No. | Sy.No. | Extent in A.G | Village/ Taluk | Bounded by |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | Building Stone | 01 | 158/1 | 02-00 | Sirwara/ Bellary | North : Part of Sy. No. 158/1<br>South: -do-<br>East : -do-<br>West: -do- |

| Sl. No. | Type of mineral | Block No. | Sy.No. | Extent in A.G | Village/ Taluk | Bounded by |
|---|---|---|---|---|---|---|
| 2. | Building Stone | 02 | 158/1 | 01-00 | Sirwara/ Bellary | North : Part of Sy. No. 158/1<br>South: -do-<br>East : -do-<br>West: -do- |
| 3. | Building Stone | 03 | 158/1 | 1-00 | Sirwara/ Bellary | North : Part of Sy. No. 158/1<br>South: -do-<br>East : -do-<br>West: -do- |
| 4. | Building Stone | 04 | 158/1 | 1-00 | Sirwara/ Bellary | North : Part of Sy. No. 158/1<br>South: -do-<br>East : Q1. of Sri Smt.Lakshmidevi<br>West: Part of Sy. No. 158/1 |

**Dr. M. BASAPPA REDDY**

PR-1199 Director of Mines & Geology

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಾರ್ಯಾಲಯ, ಸಿಂಧಗಿ**

**ಅಧಿಸೂಚನೆ**

**ನಂ: ತಾಸಕಅ : ಆಡಳಿತ : ಸಿಆರ್ 2003-04,**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002 ರ ಅನುಷ್ಠಾನದ ಬಗ್ಗೆ

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ-56 ಯೋಮಸ-02(1), ದಿನಾಂಕ: 18.7.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ, ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು |

ಸರ್ಕಾರದ ಅಧಿನಿಯಮ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:-**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1 | ಕಛೇರಿ ಅಧೀಕ್ಷಕರು | 01 ಹುದ್ದೆ |
| 2 | ಪ್ರಥಮ ದರ್ಜೆ ಸಹಾಯಕರು | 01 ಹುದ್ದೆ |
| 3 | ದ್ವಿತೀಯ ದರ್ಜೆ ಸಹಾಯಕರು | 01 ಹುದ್ದೆ |
| 4 | ಬೆರಳಚ್ಚುಗಾರರು | 01 ಹುದ್ದೆ |
| 5 | ಗ್ರೂಪ್ "ಡಿ" ನೌಕರರು | 01 ಹುದ್ದೆ |

ಇಲ್ಲಿ ನಮ್ಮ ಅಧೀನದಡಿಯಲ್ಲಿ ಬರುವ ಎಲ್ಲಾ ಸಂಸ್ಥೆಗಳ ಹೆಸರು ಮತ್ತು ವಿವರಗಳು ಈ ಕೆಳಗಿನಂತೆ ಇರುತ್ತವೆ.

| ಕ್ರ.ಸಂ. | ಸಂಸ್ಥೆಯ ಹೆಸರು | ಗ್ರಾಮ | ಮಂಜೂರಿ ಸಂಖ್ಯೆ |
|---|---|---|---|
| 1 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಸತಿಗೃಹ, ಸಿಂಧಗಿ | ಸಿಂಧಗಿ | 50 |
| 2 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿಗೃಹ, ಸಿಂಧಗಿ | ಸಿಂಧಗಿ | 50 |
| 3 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿಗೃಹ, ಮಲಘಾಣ | ಮಲಘಾಣ | 50 |
| 4 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿಗೃಹ, ಕಲಕೇರಿ | ಕಲಕೇರಿ | 50 |
| 5 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿಗೃಹ, ಅಸ್ಕಿ | ಅಸ್ಕಿ | 25 |
| 6 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿಗೃಹ, ಬಿ.ಬಿ. ಇಂಗಳಗಿ | ಬಿ.ಬಿ. ಇಂಗಳಗಿ | 50 |
| 7 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿಗೃಹ, ದೇವರಹಿಪ್ಪರಗಿ | ದೇವರಹಿಪ್ಪರಗಿ | 50 |
| 8 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿಗೃಹ, ಮುಳಸಾವಳಗಿ | ಮುಳಸಾವಳಗಿ | 50 |

| | | | |
|---|---|---|---|
| 9 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿಗೃಹ, ಬಳಗಾನೂರ | ಬಳಗಾನೂರ | 50 |
| 10 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿಗೃಹ, ಅಲಮೇಲ | ಅಲಮೇಲ | 65 |
| 11 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿಗೃಹ, ಹಿಟ್ನಳ್ಳಿ ತಾಂಡೆ | ಹಿಟ್ನಳ್ಳಿ ತಾಂಡೆ | 50 |
| 12 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಸತಿಗೃಹ, ಜಾಲವಾದ | ಜಾಲವಾದ | 50 |
| 13 | ಸರಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಸತಿಗೃಹ, ಹಿಟ್ನಳ್ಳಿ ತಾಂಡೆ | ಹಿಟ್ನಳ್ಳಿ, ತಾಂಡೆ | 50 |
| 14 | ಸರಕಾರಿ ಮೆಟ್ರಿಕ್ ನಂತರದ ಬಾಲಕರ ವಸತಿಗೃಹ, ಸಿಂಧಗಿ | ಸಿಂಧಗಿ | 150 |
| 15 | ಸರಕಾರಿ ಮೆಟ್ರಿಕ್ ನಂತರದ ಬಾಲಕಿಯರ ವಸತಿಗೃಹ, ಸಿಂಧಗಿ | ಸಿಂಧಗಿ | 50 |

| ಕ್ರ.ಸಂ. | ಸಂಸ್ಥೆಯ ಹೆಸರು | ಗ್ರಾಮ | ಮಂಜೂರಿ ಸಂಖ್ಯೆ | ಷರಾ |
|---|---|---|---|---|
| 1 | ಶ್ರೀ ಬಂಜಾರ ಫ್ರೀ ಬೋರ್ಡಿಂಗ್, ಸಿಂದಗಿ | ಸಿಂಧಗಿ | 25 | ಅನುದಾನಕ್ಕೆ ಒಳಪಟ್ಟಿರುತ್ತದೆ ಸ್ವಂತ ಕಟ್ಟಡ ಇದೆ |
| 2 | ಡಾ: ಅಂಬೇಡ್ಕರ್ ಉಚಿತ ಪ್ರಸಾದ ನಿಲಯ, ಕಲಕೇರಿ | ಕಲಕೇರಿ | 25 | ” |
| 3 | ತಾಯಿ ಈರವ್ವ ನಂದಿ ಫ್ರೀ ಬೋರ್ಡಿಂಗ್ | ಸಿಂಧಗಿ | 25 | ” |
| 4 | ಈ.ಬಿ.ಎಲ್. ಹಾಸ್ಟೆಲ್, ಸಿಂಧಗಿ | ಸಿಂಧಗಿ | 50 | ” |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಕಾನೂನು ಪದವೀಧರರಿಗೆ ಧನ ಸಹಾಯ
2. ಕಟ್ಟಡಗಳ ನಿರ್ವಹಣೆ
3. ಪ.ಜಾತಿ:ಪ.ವರ್ಗದ ವಿದ್ಯಾರ್ಥಿಗಳಿಗೆ 1 ರಿಂದ 4ನೇ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮಂಜೂರಿ
4. ಪ.ಜಾತಿ : ಪ.ವರ್ಗದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನಗಳು (5 ರಿಂದ 7 ಮತ್ತು 8 ರಿಂದ 10ನೇ ತರಗತಿ)
5. ಪ್ರತಿಭಾ ವಿದ್ಯಾರ್ಥಿವೇತನ
6. ಪ.ಜಾತಿ : ಪ.ವರ್ಗದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಮಂಜೂರಿ (ಸಿ.ಎಸ್.ಎಸ್.)
7. ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ ಮಂಜೂರಿ
8. ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳ ನಿರ್ವಹಣೆ
9. ಆಶ್ರಮಶಾಲೆ : ನಿವಾಸಿ ಶಾಲೆಗಳ ನಿರ್ವಹಣೆ
10. ಅಸ್ಪೃಶ್ಯತಾ ನಿವಾರಣೆ
11. ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯವೇತನ ಮಂಜೂರಿ
12. ಎಸ್ಎಸ್ಎಲ್ಸಿ ಪರೀಕ್ಷೆಯಲ್ಲಿ ಪ್ರಥಮ ಸಲ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ
13. ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವವರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ
14. ಪಿಯುಸಿ-2 ಡಿಗ್ರಿ ಫೈನಲ್ ವರ್ಷದಲ್ಲಿ ಪ್ರಥಮ ಸಲ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಿಗೆ ಬಹುಮಾನ ಹಣ ಮಂಜೂರಿ.
15. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಮಹಿಳಾ ವಿದ್ಯಾರ್ಥಿನಿಯರಿಗೆ 8 ರಿಂದ 10ನೇ ತರಗತಿಯವರಿಗೆ ಹೆಚ್ಚಿನ ಪ್ರೋತ್ಸಾಹಧನ ಮಂಜೂರಿ
16. ಪ.ಜಾತಿ : ಪ.ವರ್ಗದವರ ಮನೆಗಳಿಗೆ ವಿದ್ಯುತ್ ಪೂರೈಕೆ (ಕುಟೀರ ಜ್ಯೋತಿ ಯೋಜನೆಯಡಿ)
17. ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಜಾತಿಯವರಿಗೆ ಪರಿಹಾರ (ಪ.ಜಾ : ಪ.ವರ್ಗದವರಿಗೆ)
18. ಜಾತಿ ಪರಿಶೀಲನೆ
19. ಅಂಬೇಡ್ಕರ್ ವಸತಿ ಯೋಜನೆ
20. ಆಶ್ರಯ ವಸತಿ ಯೋಜನೆ
21. ಅಂತರಜಾತಿ ವಿವಾಹ ಪ್ರೋತ್ಸಾಹಧನ
22. ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಗಳ ಅನುಷ್ಠಾನ

**2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯ ವಿಧಾನ**

ಮೇಲೆ ವಿವರಿಸಿದಂತೆ, ಶೀರ್ಷಿಕೆ (1) ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು :ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕರ್ತವ್ಯಗಳು : ಮೂಲ ಕರ್ತವ್ಯಗಳು**

1. ತಾಲ್ಲೂಕಿನ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಜನರ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.
2. ಪ್ರತಿ ತಿಂಗಳು ಕನಿಷ್ಟ ಪಕ್ಷ 15 ದಿನ ಪ್ರವಾಸ ಮಾಡುವುದು ಹಾಗೂ 10 ದಿನ ಹಳ್ಳಿಗಳಲ್ಲಿ ವಾಸ್ತವ್ಯ ಮಾಡುವುದು ಮತ್ತು ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಕಾಲೋನಿಗಳಿಗೆ ತಪ್ಪದೇ ಭೇಟಿ ನೀಡುವುದು.
3. ಇಲಾಖೆಯ ವಾರ್ಷಿಕ ಯೋಜನೆಯನ್ನು ತಯಾರಿಸಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಹಾಗೂ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿರವರಿಂದ ಒಪ್ಪಿಗೆ ಪಡೆದು ಹಣ ಬಿಡುಗಡೆ ಮಾಡಿಸಿಕೊಳ್ಳುವುದು.
4. ತಾಲ್ಲೂಕಿನ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಮುಖ್ಯಸ್ಥರ ಕಾರ್ಯನಿರ್ವಹಣೆಯನ್ನು ಪರಿಶೀಲಿಸುವುದು ಹಾಗೂ ಕಾರ್ಯಾಲಯದ ಸಿಬ್ಬಂದಿಯವರ ಕೆಲಸಗಳನ್ನು ತಪಾಸಣೆ ಮಾಡುವುದು.
5. ಮೇಲಾಧಿಕಾರಿಗಳಿಗೆ ತಿಂಗಳ 3 ತಿಂಗಳ, ಅರ್ಧ ವರ್ಷದ ಹಾಗೂ ವರ್ಷದಲ್ಲಿ ಸಾಧಿಸಿದ ಪ್ರಗತಿ ಪತ್ರಿಕೆಗಳನ್ನು ಸಲ್ಲಿಸುವುದು
6. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ತಿಂಗಳ ಖರ್ಚಿನ ಮಾಹಿತಿ ಪಿರಾಡಿಕಲ್ಸ್ ಮಾಹಿತಿ ಹಾಗೂ ಚೆಕ್ಕುಗಳ ಶಿಷ್ಯವೇತನ ಮಂಜೂರು ಮಾಡಿ ಚೆಕ್ ಅಕೌಂಟ್ಸ್ ಮಾಹಿತಿ ತಯಾರಿಸಿ ಸಲ್ಲಿಸುವುದು.
7. ತಾಲ್ಲೂಕಿನಲ್ಲಿಯ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಶಾಲೆಗಳಿಗೆ ಹೋಗುವ ಮಕ್ಕಳ ಮಾಹಿತಿಯನ್ನು ಹಾಗೂ ಮೂಲಭೂತ ಮಾಹಿತಿಯನ್ನು ತಯಾರಿಸಿ ಇಡುವುದು.

**ಶಿಕ್ಷಣ:-**

8. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ 1 ರಿಂದ 10ನೇ ತರಗತಿಯ ಮೆಟ್ರಿಕ್ ಪೂರ್ವ ಶಿಷ್ಯವೇತನ ಹಾಗೂ ಮೆಟ್ರಿಕ್ ನಂತರದ ಶಿಷ್ಯವೇತನ ಮಂಜೂರು ಮಾಡುವುದು ಹಾಗೂ ಅದರ ಲೆಕ್ಕಪತ್ರ ಇಡುವುದು ಮತ್ತು ಶಿಷ್ಯವೇತನ ಹಂಚಿಕೆಯಾದ ಪಾವತಿಗಳನ್ನು ಇಡುವುದು.
9. ತಾಲ್ಲೂಕಿನಲ್ಲಿಯ ಎಲ್ಲ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಪರಿವೀಕ್ಷಣೆ ಮಾಡುವುದಲ್ಲದೆ ಅನುದಾನಿತ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಸತಿ ನಿಲಯಗಳನ್ನು ವೀಕ್ಷಣೆ ಮಾಡುವುದು.
10. ಎಸ್ಎಸ್ಎಲ್‌ಸಿ ಪರೀಕ್ಷೆಯಲ್ಲಿ ಪ್ರಥಮ ಬಾರಿಗೆ ಪ್ರಥಮ ದರ್ಜೆಯಲ್ಲಿ ಪಾಸಾದ ವಿದ್ಯಾರ್ಥಿಗಳಿಗೆ ಬಹುಮಾನ ಹಣ ವಿತರಣೆ ಮಾಡುವುದು.
11. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಶಾಲೆಗೆ ಹೋಗುವ ಮಕ್ಕಳಿಗೆ ಪುಕ್ಕಟೆಯಾಗಿ ಕೊಡುವ ಸಮವಸ್ತ್ರ ಹಾಗೂ ಪಠ್ಯ ಪುಸ್ತಕಗಳನ್ನು ಹಾಗೂ ಇತರೆ ಶೈಕ್ಷಣಿಕ ಸಹಾಯವನ್ನು ಸರಿಯಾಗಿ ವಿತರಣೆ ಮಾಡಿದ್ದಾರೆಯೇ ಹೇಗೆ ಅನ್ನುವುದನ್ನು ಖಚಿತಪಡಿಸಿಕೊಳ್ಳುವುದು.
12. ಪರಿಶಿಷ್ಟ ಜಾತಿಯ ಜನರ ಕಾಲೋನಿಯಲ್ಲಿ ವಯಸ್ಕರ ಶಿಕ್ಷಣ ಯುವಜನ ಇಲಾಖೆ ಹಾಗೂ ಸಹಕಾರ ಇಲಾಖೆಯ ವತಿಯಿಂದ ಸಂಸ್ಥೆಗಳನ್ನು ಸ್ಥಾಪಿಸುವುದರಲ್ಲಿ ಸಹಕಾರ ನೀಡುವುದು.
13. ಶಿಕ್ಷಣ ಸಂಸ್ಥೆಗಳಲ್ಲಿ ಶಿಷ್ಯವೇತನ ಸರಿಯಾಗಿ ವಿತರಣೆ ಮಾಡಿದ ಬಗ್ಗೆ ಹಾಗೂ ಬುಕ್ ಬ್ಯಾಂಕ್ ಯೋಜನೆಯಲ್ಲಿ ನೀಡಿದ ಸವಲತ್ತುಗಳನ್ನು ಉಪಯೋಗಿಸಿದ ಬಗ್ಗೆ ತಪಾಸಣೆ ಮಾಡುವುದು.
14. ವಸತಿ ನಿಲಯಗಳ ಕಟ್ಟಡ ಕಟ್ಟುವುದು, ಸಮಾಜ ಮಂದಿರ ಕಟ್ಟುವುದು, ಕಲ್ಯಾಣ ಮಂದಿರ ಕಟ್ಟುವುದು ಹಾಗೂ ಶಾಲಾ ಕಟ್ಟಡ ಕಟ್ಟುವುದನ್ನು ಪರಿಶೀಲಿಸುವುದು ಹಾಗೂ ಕಾರ್ಯಗತ ಮಾಡುವುದು.
15. ಟಿ.ಎಸ್.ಪಿ. ಯೋಜನೆ ಹೊರತುಪಡಿಸಿ ಹುಡ್ಕೋ, ಎನ್ಆರ್‌ಇಪಿ ಪಿಎಲ್‌ಜಿಆರ್ ಎಲ್‌ಸಿಎಚ್ ಯೋಜನೆ ಅಡಿಯಲ್ಲಿ ಯೋಗ್ಯ ಫಲಾನುಭವಿಗಳನ್ನು ಗುರುತಿಸುವುದು ಹಾಗೂ ಆಯ್ಕೆ ಮಾಡಿ ಸಂಬಂಧಿಸಿದ ಇಲಾಖೆಗೆ ಒದಗಿಸುವುದು.
16. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಮೇಲೆ ನಡೆದ ದೌರ್ಜನ್ಯ ಪ್ರಕರಣಕ್ಕೆ ಸಂಬಂಧಿಸಿದಂತೆ ಸಿಆರ್ ಸೆಲ್ಲಿನ ಅಧಿಕಾರಿಗಳೊಂದಿಗೆ ಸಹಕರಿಸುವುದು ಹಾಗೂ ತಾಲ್ಲೂಕಾ ಮಟ್ಟದ ನಾಗರಿಕ ಹಕ್ಕು ಸಂರಕ್ಷಣಾ ಸಮಿತಿಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುವುದು.
17. ನೈಸರ್ಗಿಕವಾಗಿ ಲುಕ್ಸಾನು ಹಾಗೂ ಬೆಂಕಿ ಅನಾಹುತದಲ್ಲಿ ನೊಂದ ಫಲಾನುಭವಿಗಳಿಗೆ ಧನಸಹಾಯ ಮಾಡುವಲ್ಲಿ ಪ್ರಯತ್ನಿಸುವುದು.
18. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಸಲುವಾಗಿ ಮನೆ ಜಾಗೆ, ಸ್ಮಶಾನ ಜಾಗೆ, ಈಗಿನ ಕಾಲೋನಿಯನ್ನು ಹೆಚ್ಚಿಸುವ ಬಗ್ಗೆ ಹಾಗೂ ಪ್ರತ್ಯೇಕ ಕಾಲೋನಿ ನಿರ್ಮಾಣ ಬಗ್ಗೆ, ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಕಟ್ಟಡ ನಿರ್ಮಾಣ ಬಗ್ಗೆ ಭೂಮಿ ಖರೀದಿ ಬಗ್ಗೆ, ಪ್ರಕರಣಗಳನ್ನು ತಯಾರಿಸುವುದು. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರಿಗೆ ಮನೆಗಳ ನಿರ್ಮಾಣ ಮಾಡಲು ಮಂಜೂರಾದ ಭೂಮಿಯನ್ನು ಹಾಗೂ ಲೀಜ್ ಮೇಲೆ ಕೊಟ್ಟ ಭೂಮಿಯನ್ನು ವಶಪಡಿಸಿಕೊಳ್ಳುವ ಕ್ರಮ ಜರುಗಿಸುವುದು. ಸರಕಾರಿ ಗಾಂವಠಾಣ ಜಾಗೆಯನ್ನು ಅಭಿವೃದ್ಧಿಪಡಿಸಲು ಮತ್ತು ಮನೆ ಕಟ್ಟಲು ಕಂದಾಯ ಇಲಾಖೆಯಿಂದ ಪಡೆದುಕೊಳ್ಳುವ ಕ್ರಮ ಜರುಗಿಸುವುದು.

**ಆರ್ಥಿಕ ಮತ್ತು ಅಭಿವೃದ್ಧಿ:**

19. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಒಕ್ಕುಲುತನ ಕಾಲೋನಿಗಳನ್ನು ನಿರ್ವಹಿಸುವುದು ಹಾಗೂ ಜಾಯಿಂಟ್ ಫಾರ್ಮ್, ಕೈಗಾರಿಕೆ, ಕೂಲಿಕಾರ ಸಹಕಾರಿ ಸಂಘಗಳನ್ನು ಅವರ ಅನುಕೂಲಕ್ಕಾಗಿ ಮಾಡುವುದು.

20. ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಸೋಷಿಯಲ್ ಹಾಗೂ ಎಕನಾಮಿಕ್ ಸರ್ವೆ ಮಾಡಿ ಫಲಾನುಭವಿಗಳನ್ನು ವಿಶೇಷ ಘಟಕ ಯೋಜನೆ : ಐಆರ್‌ಡಿಪಿ : ಟಿಎಸ್‌ಪಿ : ಸಂತ್ಯೋದಯ : ಟ್ರಾಯಜಂ ತಾಳಿಭಾಗ್ಯ : ಐಆರ್‌ಡಿಪಿ : ಗಂಗಾ ಕಲ್ಯಾಣ : ಭಾಗ್ಯಜ್ಯೋತಿ ಹಾಗೂ ನೇಗಿಲ ಭಾಗ್ಯ ಯೋಜನೆಗಳಿಗೆ ಗುರುತಿಸಿ ಸದರಿ ಯೋಜನೆಗಳನ್ನು ಕಾರ್ಯಗತ ಮಾಡುವುದು.
21. ಭೂ ರೈತ ಕಾರ್ಮಿಕರನ್ನು ಗುರುತಿಸುವುದು.
22. ಸ್ಥಳೀಯ ಸಂಸ್ಥೆಗಳಲ್ಲಿ ಕಾಯ್ದಿರಿಸಿದ ಶೇ-18 ಹಣದಲ್ಲಿ ಯೋಜನೆಗಳನ್ನು ಕಾರ್ಯಗತ ಮಾಡುವುದು.
23. ಅಂತರಜಾತಿ ವಿವಾಹವಾದ ದಂಪತಿಗಳಿಗೆ ಸಹಾಯಧನ ಮಂಜೂರಿ ಕುರಿತು ಪ್ರಕರಣ ತಯಾರಿಸುವುದು.
24. ಪರಿಶಿಷ್ಟ ಜಾತಿಯ ಜನರ ವಾಸದ ಮನೆಗಳಿಗೆ ಹಾಗೂ ಕಾಲೋನಿಗೆ ವಿದ್ಯುತ್ ಪೂರೈಕೆ ಕುರಿತು ಹಾಗೂ ಕುಡಿಯುವ ನೀರಿನ ಪೂರೈಕೆ ಕುರಿತು ಸಮೀಕ್ಷೆ ಮಾಡುವುದು.
25. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರು ಯಾರು ವೃದ್ಧಾಪ್ಯ ವೇತನ, ವಿಧವಾ ವೇತನ, ಹೆರಿಗೆ ಭತ್ಯೆ, ಅಂಗವಿಕಲರ ಭತ್ಯೆ ಮತ್ತು ಕ್ರಾನಿಕ್ ರೋಗದಿಂದ ಬಳಲುವವರು ಇಂತಹ ಫಲಾನುಭವಿಗಳನ್ನು ಗುರುತಿಸಿ ಸಂಬಂಧಿಸಿದ ಅಧಿಕಾರಿಗಳಿಗೆ ಭೇಟಿಯಾಗಿ ಮಂಜೂರಿಸುವುದು.
26. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರು ತಮ್ಮ ಭೂಮಿಗಳನ್ನು ಮರಳಿ ಪಡೆಯುವಲ್ಲಿ ಸಹಾಯ ಮಾಡುವುದು ಹಾಗೂ ಭೂಮಿ ಮಂಜೂರಿಯಲ್ಲಿಯೂ ಸಹಾಯ ಮಾಡುವುದು.

**ಇತರೆ**

27. ಸರಕಾರಿ ಇಲಾಖೆ, ಅರೆ ಸರಕಾರಿ ಇಲಾಖೆ, ಸ್ಥಳೀಯ ಸಂಸ್ಥೆ ಮತ್ತು ಔದ್ಯೋಗಿಕಗಳಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಅಭ್ಯರ್ಥಿಗಳನ್ನು ಸರಕಾರಿ ನಿಯಮಾವಳಿ ಪ್ರಕಾರ ನೇಮಕಾತಿ ಮಾಡಿದ ಬಗ್ಗೆ ಪರಿಶೀಲನೆ ಮಾಡಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ವರದಿ ಸಲ್ಲಿಸುವುದು.
28. ಇತರೆ ಇಲಾಖೆಯಿಂದ ಜಾತಿ ಪರಿಶೀಲನೆ ಅಂತಾ ಬಂದ ಜಾತಿ ಪ್ರಮಾಣ ಪತ್ರಗಳ ಸಿಂಧುತ್ವವನ್ನು ಪರಿಶೀಲನೆ ಮಾಡುವುದು.
29. ಸರಕಾರಿ ಸಂಘಗಳಲ್ಲಿ ಯೂತ್ ಕ್ಲಬ್‌ಗಳಲ್ಲಿ ಮಹಿಳಾ ಮಂಡಳಿಗಳಲ್ಲಿ ಸ್ಥಳೀಯ ಅಭಿವೃದ್ಧಿ ಬ್ಯಾಂಕ್‌ಗಳಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರು ಸದಸ್ಯತ್ವ ಹೊಂದಲು ಪ್ರೋತ್ಸಾಹಿಸುವುದು.
30. ಕಾರ್ಯನಿರ್ವಾಹಕ ಅಧಿಕಾರಿಗಳು ತಾಲ್ಲೂಕು ಪಂಚಾಯತ್ : ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು : ಜಿಲ್ಲಾ ಪಂಚಾಯತ್ ಅಧಿಕಾರಿಗಳ ಹಾಗೂ ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ರವರು ವಹಿಸುವ ಯಾವುದೇ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು.

**3) ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:-**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರುಸಹಿ ಮಾಡಿಸಿದ ನಂತರ, ಸದರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿ ಪ್ರಕಾರ ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಸಲ್ಲಿಸುವ ಕ್ರಮ ಕೈಗೊಳ್ಳುವುದು.

**ಸದರಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ವಿವರ**

| ಕ್ರ. ಸಂ. | ಹೆಸರು | ಹುದ್ದೆ | ವಹಿಸಿಕೊಟ್ಟ ಶಾಖೆ |
|---|---|---|---|
| 1 | ಶ್ರೀ ವಿ.ಜಿ. ಜೋಶಿ | ತಾ.ಸ.ಕ.ಅ. | ಒಟ್ಟಾರೆ ಮೇಲ್ವಿಚಾರಣೆ ಮತ್ತು ಯೋಜನೆಗಳ ಅನುಷ್ಠಾನ |
| 2 | ಶ್ರೀ ಎಸ್.ಎಸ್. ಪಾಟೀಲ | ಪ್ರ.ದ.ಸ. | ಲೆಕ್ಕಪತ್ರ : ಸಿಬ್ಬಂದಿ : ಆಯುಕ್ತರು : ಸಕಇ : ಜಿ.ಪಂ: ಸಿಬ್ಬಂದಿ ಮತ್ತು ಆಡಳಿತ : ಜಿಸಕಅ ಎ.ಜಿ. ತಪಾಸಣೆಗಳಿಗೆ ಅನುಸರಣೆ : ಎಲ್‌ಎಕ್ಯು.ಎಲ್.ಸಿ. ಪ್ರಶ್ನೆಗಳು : ವೇತನ : ಪಾವ್ತಿ : ಕ್ಯಾಶ್‌ಬುಕ್ ನಿರ್ವಹಣೆ : ಆರ್.ಡಿ. ನಿರ್ವಹಣೆ : ಸಿಬ್ಬಂದಿಗಳ ಸೇವಾ ಪುಸ್ತಕಗಳ ನಿರ್ವಹಣೆ : ಸಾಧಿಲ್ವಾರು ಬಿಲ್ಲುಗಳನ್ನು ಮಾಡುವುದು : ಸ್ಟೇಷನರಿ ಖರೀದಿ ಹಾಗೂ ವಿಲೇವಾರಿ : ತಾಸಕಅ ಹೆಸರಿನಲ್ಲಿರುವ ಎಸ್.ಬಿ. ಖಾತೆ ನಿರ್ವಹಣೆ ಇತ್ಯಾದಿ. |
| 3 | ಶ್ರೀ ಬಿ.ಎಚ್. ಮಾನೆ | ದ್ವಿ.ದ.ಸ. | ಭಾಸ ಶಿಷ್ಯವೇತನ : 1 ರಿಂದ 10 : ಲೇಡಿಸ್ : ಗ್ರಾಪಂ : ಜಮಾಬಂದಿ : ಬಹುಮಾನ ಹಣ : ಮಂಜೂರಿ : ಇತ್ಯಾದಿ : ವಿಷಯಗಳ ನಿರ್ವಹಣೆ ಆವಕ-ಜಾವಕ : ಸ್ಟಾಂಪ್ ಖರೀದಿ ಹಾಗೂ ಖರ್ಚಿನ ಲೆಕ್ಕ ಇಡುವುದು ಇತ್ಯಾದಿ. |
| 4 | | ಟೈಪಿಸ್ಟ್ | ಬೆರಳಚ್ಚು : ತಾ.ಸ.ಕ.ಗಳ ಡೈರಿ : ಮುಂಗಡ ಪ್ರವಾಸ ಕಾರ್ಯಕ್ರಮ : ತನಿಖಾ ವರದಿಗಳ ತಯಾರಿಕೆ ಇತ್ಯಾದಿ |

| ಕ್ರ. ಸಂ. | ಹೆಸರು | ಹುದ್ದೆ | ವಹಿಸಿಕೊಟ್ಟ ಶಾಖೆ |
|---|---|---|---|
| 5 | ಶ್ರೀ ಎ.ಎ. ಪಾರೇಕರ | ಜವಾನ | ಕಛೇರಿ ಕಾವಲು : ಸ್ವಚ್ಚತೆ : ಟಪಾಲು ಹಂಚಿಕೆ ಟ್ರೆಜರಿಯಿಂದ ಹಣ ತರುವುದು ಹಾಗೂ ರಾತ್ರಿ ಕಾವಲು ಇತ್ಯಾದಿ. |

**4) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸರ್ಕಾರವು : ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಕ್ರಮ ಜರುಗಿಸಿ ಇತ್ಯರ್ಥಪಡಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**5) ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರಿಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು ಆದೇಶಗಳು ವಾರ್ಷಿಕ ಸಂಕಲನ, ಕ್ರಿಯಾ ಯೋಜನೆ ಹಾಗೂ ಕಿರು ಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು (ಶ್ರೀ ಎಸ್.ಎಸ್. ಪಾಟೀಲ, ಲೆಕ್ಕಿಗ)
3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯಮಟ್ಟದಲ್ಲಿ ಜಂಟಿ ನಿರ್ದೇಶಕರು (ವಿ.ಫ.ಯೋ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು,

ಪಿ.ಆರ್. 1200 ಸಿಂಧಗಿ

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ ರವರ ನ್ಯಾಯಾಲಯದಲ್ಲಿ**

**ನಂ: ಇಎಕ್ಸ್‌ಇ : 3 : ಡಿಟಿಸಿಆರ್‌ಎಂ : ನಂ : 287 : 2002-2003, ದಿನಾಂಕ: 16ನೇ ಅಕ್ಟೋಬರ್ 2003**

ಉಪಸ್ಥಿತರು:- ಎಂ.ಕೆ. ಕುಟ್ಟಪ್ಪ,

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

| | | |
|---|---|---|
| ಫಿರ್ಯಾದುದಾರರು | ವಿರುದ್ಧ | ಆರೋಪಿಗಳು |
| ಅಬಕಾರಿ ಉಪ ನಿರೀಕ್ಷಕರು<br>ಸಂಚಾರಿದಳ, ಸೋಮವಾರಪೇಟೆ | | ಆರೋಪಿಗಳು ಪರಾರಿಯಾಗಿರುತ್ತಾರೆ |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 12.11.2002 ರಂದು ಸೋಮವಾರಪೇಟೆ ಸಂಚಾರಿದಳ ಅಬಕಾರಿ ನಿರೀಕ್ಷಕರು ಸಮಯ ಸುಮಾರು ಬೆಳಿಗ್ಗೆ 6.30 ರ ಹೊತ್ತಿಗೆ ತಮ್ಮ ಸಿಬ್ಬಂದಿಯವರೊಂದಿಗೆ ಕರ್ತವ್ಯದ ಮೇಲಿದ್ದಾಗ ಸೋಮವಾರಪೇಟೆ ತಾಲ್ಲೂಕು ಕೊಡ್ಲಿಪೇಟೆಯ ಹಂಪಾಪುರ ಅಂಗನವಾಡಿ ಶಾಲೆಯ ಎದುರು ಒಂದು ಟಿವಿಎಸ್ 50 ಲೂನಾ ಇದ್ದುದು ಕಂಡು ಬಂದಿದ್ದು ಲೂನಾದ ಚಾಲಕನು ಇಲಾಖಾ ಜೀಪನ್ನು ಕಂಡು ಲೂನಾವನ್ನು ಬಿಟ್ಟು ಓಡಿಹೋಗಿರುತ್ತಾನೆ. ಅನುಮಾನದಿಂದ ಹ್ಯಾಂಡಲ್‌ಗೆ ನೇತು ಹಾಕಿಕೊಂಡಿದ್ದ 2 ಬ್ಯಾಗ್‌ನಲ್ಲಿ ನೀಲಿ ಬಣ್ಣದ ಪ್ಲಾಸ್ಟಿಕ್‌ಕ್ಯಾನುಗಳನ್ನು ಪರಿಶೀಲಿಸಿದಾಗ ಸುಮಾರು 20.000 ಲೀಟರ್ ಕಳ್ಳಭಟ್ಟಿ ಸಾರಾಯಿ ಇದ್ದುದು ಕಂಡು ಬಂದಿರುತ್ತದೆ. ಅಲ್ಲಿ ಹಾಜರಿರುವ ಸಾಕ್ಷಿದಾರರ ಸಮಕ್ಷಮದಲ್ಲಿ ಪ್ರತಿ ಕ್ಯಾನಿನಿಂದ 180 ಎಂ.ಎಲ್. ನ ಸಾರಾಯಿಯನ್ನು ರಾಸಾಯನಿಕ ಪರೀಕ್ಷೆಗೆ ತೆಗೆದು ಒಂದು ಚಿಕ್ಕ ಸೀಸೆಗೆ ತುಂಬಿಸಿ ಅದರ ಬಾಯಿಗೆ ಬಟ್ಟೆಯಿಂದ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಿರುತ್ತಾರೆ. ಆರೋಪಿಗಳು ಯಾರು ಪತ್ತೆಯಾಗದ ಕಾರಣ ಅಕ್ರಮವಾಗಿ 10.000 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಣಿಕೆಗೆ ಬಳಸಿದ್ದು ಟಿವಿಎಸ್ 50 ಲೂನಾ ನಂ. ಸಿಎಂ 4352ನ್ನು ಸ್ಥಳ ಮಹಜರಿನ ಮೂಲಕ ಇಲಾಖಾ ವಶಕ್ಕೆ ವಶಪಡಿಸಿಕೊಂಡ ಮೊಕದ್ದಮೆ ಸಂ. 16: 2002-03 ರಂತೆ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ಉಪ ನಿರೀಕ್ಷಕರು ಉಪವಲಯ ಸೋಮವಾರಪೇಟೆ ರವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು ಇದರ ಬಗ್ಗೆ ತನಿಖೆಯನ್ನು ಮುಂದುವರಿಸಿ ಆರೋಪಿ ಪತ್ತೆಯಾಗದ ಕಾರಣ ಮತ್ತು ಮೊಕದ್ದಮೆ ದಾಖಲಾಗಿ ಎರಡು ತಿಂಗಳಾಗುತ್ತಾ ಬಂದರೂ ಸಂಬಂಧಪಟ್ಟವರು ಸೋಮವಾರಪೇಟೆ ಉಪನಿರೀಕ್ಷಕರ ಕಛೇರಿಗಾಗಲಿ ಅಥವಾ ನಿರೀಕ್ಷಕರ ಕಛೇರಿಗಾಗಲಿ ಅಥವಾ ಪ್ರಾಧಿಕಾರಕ್ಕಾಗಲಿ ಲಿಖಿತ ಮೂಲಕ ಅರ್ಜಿ ಸಲ್ಲಿಸಿರುವುದಿಲ್ಲ ಮತ್ತು ಕಛೇರಿ ಆವರಣದಲ್ಲಿ ತೆರೆದ ಆವರಣದಲ್ಲಿ ನಿಲ್ಲಿಸಿದ್ದು ಗಾಳಿ ಮಳೆಗೆ ಹಾಳಾಗುವ ಸಂಭವವಿರುವುದರಿಂದ ಸರ್ಕಾರಕ್ಕೆ ಬರುವ ಆದಾಯವು ಕೈ ತಪ್ಪುವ ಸಾಧ್ಯತೆಯಿರುವುದರಿಂದ ಮುಂದಿನ ಕ್ರಮ ತೆಗೆದುಕೊಳ್ಳಬೇಕಾಗಿ ತಮ್ಮ ತನಿಖಾ ವರದಿ ಸಲ್ಲಿಸಿರುತ್ತಾರೆ.

ಈ ಪ್ರಾಧಿಕಾರವು 30.1.2003 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಂಗಳೂರು (ಪೂರ್ವ) ರವರಿಗೆ ಪತ್ರ ಬರೆದು ವಾಹನದ "ಬಿ" ವಹಿಯನ್ನು ಮಾಲೀಕರ ಹೆಸರು ಮತ್ತು ವಿಳಾಸವನ್ನು ಪಡೆದು ಸದರಿ "ಬಿ" ವಹಿಯಂತೆ ವಾಹನದ ಮಾಲೀಕರಾದ ಶ್ರೀ ಜಾರ್ಜ್‌ಕ್ರಿಸ್ಟೋಫರ್ 84:1 5ನೇ ಕ್ರಾಸ್, ಸಗಾಯಂಪುರ ಬೆಂಗಳೂರು ರವರಿಗೆ ಸೇರಿದ್ದಾಗಿದ್ದೆಂದು ತಿಳಿಸಿರುತ್ತಾರೆ. ದಿನಾಂಕ: 7.3.2003 ರಂದು ಕಾರಣ ಕೇಳಿಕೆ ನೋಟೀಸನ್ನು ಅಬಕಾರಿ ಕಾಯ್ದೆ 1965ರ ಕಲಂ 43 (ಬಿ)ರ ಅಡಿಯಲ್ಲಿ ನೋಂದಣಿ ಅಂಚೆ ಮೂಲಕ ನೀಡಲಾಗಿರುತ್ತದೆ. ಆದರೆ ಸದರಿ ನೋಟೀಸ್ ಜಾರಿಯಾಗದೆ ಹಿಂದಕ್ಕೆ ಬಂದಿರುತ್ತದೆ. ಮತ್ತು ವಾಹನವನ್ನು ಕೋರಿ ಯಾವುದೇ ವ್ಯಕ್ತಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಪಡಿಸುವಾಗ ಅಪರಾಧಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸ್ವತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಅರ್ಜಿಯನ್ನು ಸಲ್ಲಿಸದಿದ್ದಲ್ಲಿ ಸದ್ರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ) ರ ಅಡಿಯಲ್ಲಿ ಜಪ್ತು ಪಡಿಸಿದ್ದ ಅಕ್ರಮ ಕಳ್ಳಭಟ್ಟಿ ಸಾರಾಯಿಯನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣವು ದಾಖಲಾಗಿ 10 ತಿಂಗಳುಗಳು ಕಳೆದರೂ ಈವರೆಗೆ ಯಾವುದೇ ವ್ಯಕ್ತಿಯು ಈ ವಾಹನವನ್ನು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಾಧಾರಗಳೊಂದಿಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಈ ಕಾರಣದಿಂದ ವಾಹನ ಮಾಲೀಕನು ತನ್ನ ತಿಳುವಳಿಕೆಯಿಂದಲೂ ಹಾಗೂ ಸ್ವತಃ ತಾನೇ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾನೆ ಎಂದು ಭಾವಿಸಬೇಕಾಗಿರುತ್ತದೆ. ಹಾಗೂ ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಹಾಗೂ ಪ್ರಕರಣ ದಾಖಲಾಗಿ 10 ತಿಂಗಳುಗಳು ಕಳೆದಿದ್ದರೂ ಯಾವುದೇ ವ್ಯಕ್ತಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವನ್ನು ತನ್ನದೆಂದು ಕೋರದೇ ಇರುವುದರಿಂದ ವಾಹನದಲ್ಲಿ ಅಕ್ರಮ ಮದ್ಯವು ಸಾಗಾಣಿಕೆಯಾಗಿರುವುದು ದೃಢಪಟ್ಟಿರುತ್ತದೆ. ಅಲ್ಲದೇ ವಾಹನವನ್ನು ತೆರೆದ ಜಾಗದಲ್ಲಿ ನಿಲ್ಲಿಸಿದ್ದು ಅದು ಬಿಸಿಲು ಮಳೆ ಮುಂತಾದ ಹವಾಮಾನ ವೈಪರೀತ್ಯದಿಂದ ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಂಡು ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆಯಿರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಆದೇಶ.

**ಆದೇಶ**

ಎಂ.ಕೆ. ಕುಟ್ಟಪ್ಪ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965ರ ಕಲಂ 43(ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ 43(ಸಿ) ರನ್ವಯ ಅಬಕಾರಿ ಉಪ ನಿರೀಕ್ಷಕರು ಸೋಮವಾರಪೇಟೆ ಸಂಚಾರಿದಳ ರವರ ಮೊಕದ್ದಮೆ ಸಂ. 16:2002-03 ದಿನಾಂಕ: 12.11.2002 ರಲ್ಲಿ ವಶಪಡಿಸಿಕೊಂಡಿರುವ ಲೂನಾ ಟಿ.ವಿ.ಎಸ್. 50 ಸಿಎಒ 4352 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 15.10.2003 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 1201

**OFFICE OF THE COMMISSIONER OF COMMERCIAL TAXES IN KARNATAKA**

**NOTIFICATION**

**No. KSA.CR/29/01-02, Bangalore, dated 27th October 2003.**

In exercise of the powers conferred on me by proviso (aaa) to sub-section (1) of Section 19AA of the KST Act, 1957 (Karnataka Act, 25 of 1957), I, Ashok Kumar C. Manoli, Commissioner of Commercial Taxes, Karnataka, do hereby notify that departments of Government of Karnataka and Zilla Panchayats in the State shall not make deduction of tax at source as provided under section 19AA of the said Act from M/s. Karnataka Antibiotics and Pharmaceuticals Ltd., Bangalore bearing KST RC No. 00800302 and CST RC No. 00850305 borne on the files of DCCT (Assts-21), Fast Track, Bangalore with immediate effect and upto 31.3.2004.

PR-1228

**Ashok Kumar C. Manoli**
Commissioner of Commercial Taxes,
Karnataka, Bangalore.